ಡಾ.ಕೆ.ಜಿ.ವಸಂತಮಾಧವ *

# ಬೈಂದೂರಿನ ಎರಡು ಶಿಲಾಶಾಸನಗಳ ಅಧ್ಯಯನ

ಕುಂದಾಪುರ ತಾಲೂಕಿನ ಉತ್ತರದ ಅಂಚಿನಲ್ಲಿರುವ ಬೈಂದೂರು ಕೆಲವು ಪ್ರಮುಖ ಇತಿಹಾಸ ಸ್ಮಾರಕ ಮತ್ತು ಕೆಲವು ಶಾಸನಗಳನ್ನು ಒಳಗೊಂಡಿದೆ. ಈ ಶಾಸನ ಮತ್ತು ಸ್ಮಾರಕಗಳು ಇಲ್ಲಿನ ಇತಿಹಾಸದ ಕೆಲವು ಸಂಗತಿಗಳನ್ನು ಬೆಳಕಿಗೆ ತರಲು ಸಹಾಯವಾಗುತ್ತವೆ. ಇಂತಹ ಶಾಸನಗಳಲ್ಲಿ ಶಕ.೧೩೭೧ರ ಎರಡು ಶಿಲಾಲೇಖನಗಳು ಗಮನಿಸು ವಂತಾದ್ದೆ. ಈಶಾಸನಗಳು ಈಗ ನಾಶವಾಗಿದ್ದರೂ ಇವುಗಳ ಇರುವುಕೆಯನ್ನು ಶಾಸನ ಖಾತೆಯ ೧೯೩೦ರ ವರದಿಯಲ್ಲಿ ತಿಳಿಸಿವೆ.[1] ಈ ಶಾಸನಗಳ ಕೆಲವು ಅಂಶಗಳನ್ನು ಶಾಸನ ಖಾತೆಯ ಮುಖ್ಯಾಧಿಕಾರಿಯಿಂದ ಈ ಪ್ರಬಂಧದ ಲೇಖಕರು ಪಡೆದುಕೊಂಡಿದ್ದಾರೆ.

ಜಿನಚಿಹ್ನೆ ಹೊಂದಿರುವ ಒಂದು ಶಾಸನವು ವಿಜಯಾಭ್ಯುದಯ ಶಕವರುಷ ೧೩೭೧ನ್ನು ತಿಳಿಸಿ ಮಲ್ಲಿಕಾರ್ಜುನ ಮಹಾರಾಯನ ಆಳ್ವಿಕೆ ವಿಜಯನಗರ ದಲ್ಲಿದ್ದದ್ದು ತಿಳಿಸುತ್ತದೆ. ಇದರೊಂದಿಗೆ ದೇವಪ್ಪದಂಣಾಯಕ ಮತ್ತು ಬಾರಕೂರು ರಾಜ್ಯಪಾಲಕ ಗೋಪನಾಥ ಒಡೆಯನ ಉಲ್ಲೇಖವಿದೆ. ಇವುಗಳು ಆಗಿನ ಕಾಲದ ರಾಜಕೀಯ ಸ್ಥಿತಿಗತಿಗಳನ್ನು ತಿಳಿಸುತ್ತದೆ. ನಂತದ ''ಸುರನರ ಉರಗನು ಧರೆಯೊಳಗಗ್ಗಳಂ ಬೈಂದೂರು ಪಾರ್ಶ್ವನಾಥ'' ಎಂಬ ಉಕ್ತಿ ಈ ಶಾಸನದಲ್ಲಿ ಬಂದಿದೆ. ಇದೇ ಶಾಸನವು ಈ ನಗರದೊಳಗಿ ರುವ ಪಾರ್ಶ್ವನಾಥ ಬಸದಿಯ ಗಡಿತಿಳಿಸಿ, ಈ ಬಸದಿಯ ಧರ್ಮ ಕಟ್ಟಳೆಗೆ ಸ್ಥಳೀಯ ಸೆಟ್ಟರು[2] ಬೈಂದೂರು ಮತ್ತು ಉಪ್ಪುಂದ ಗ್ರಾಮಗಳಲ್ಲಿ ಬಿಟ್ಟದಾನ ಭೂಮಿಗಳ ವಿವರ ತಿಳಿಸುತ್ತದೆ. ಇಷ್ಟಲ್ಲದೆ, ಈ ಬಸದಿಯ ಮೇಲೆ ಮೇಗಿನ ನೆಲೆಯಲ್ಲಿ, ಮಳೆಗಾಲದಲ್ಲಿ ತಂಗುವ ಎರಡು ತಂಡ 'ರುಶಿ'ಯರ್ಗೆಮಾಳ್ಪನ ಒಡಹುಟ್ಟಿದ ಬಾಲೆ ಯಕ್ಕಸೆಟ್ಟಿಯು ಮಾಡಿದ ಧರ್ಮವನ್ನು ಇದೇ ಶಾಸನವು ತಿಳಿಸುತ್ತದೆ. ಬಿಟ್ಟಧರ್ಮ ಬಾರಕೂರು ಕಾಟಿಗದ್ಯಾಣ ೨೦೦. ಇದರಲ್ಲಿ ಈ ಬಸದಿಯ ಪಾರ್ಶ್ವನಾಥನ 'ಹಾಲಧಾರೆ'ಯೂ ಒಳಗೊಂಡಿದೆ. ಬ್ರಹ್ಮದೇವರ ದೀಪ್ತಿಗೂ ದಾನವನ್ನು ಬಿಟ್ಟಿದೆ.

ಇಲ್ಲಿದ್ದ ಇನ್ನೊಂದು ಶಿಲಾಲೇಖವು, ಇದೇ ಶಕ ವರುಷದಲ್ಲಿ ಸಂಗೀರಾಯನ ಕುಮಾರ ಇಂದ್ರಗರಸ ಒಡೆಯನು ಹಾಡುವಳಿ ರಾಜ್ಯ ಪ್ರತಿಪಾಲಿಸುತ್ತಿದ್ದು ಈ ರಾಜ್ಯದಲ್ಲಿ ಭಟ್ಕಳ ಮತ್ತು ಬೈಂದೂರು ಒಳಗೊಂದಿತ್ತು ಎಂದು ತಿಳಿಸಿದೆ. ಇದೇ ಪಾರ್ಶ್ವನಾಥ ಬಸದಿಯ ತೀರ್ಥಂಕರ ಪೂಜಾ ವಿಧಿಗಳಿಗೆ ಸ್ಥಳೀಯ ಸೆಟ್ಟರು ೧೨ ಮೂಡೆ ಉತ್ಪತ್ತಿ ಇರುವ ಗದ್ದೆಯನ್ನು ಬೈಂದೂರಿನಲ್ಲಿ ಬಿಟ್ಟರೆಂದು ಇದೇ ದಾಖಲೆಯಲ್ಲಿ ನಮೂದಿಸಿದೆ.

## ಉಪಸಂಹಾರ

ಈ ಎರಡು ಶಾಸನಗಳು ಬೈಂದೂರು ಪರಿಸರದ ಸಮಗ್ರ ಇತಿಹಾಸ ತಿಳಿಸುತ್ತವೆ. ಆಗಿನ ಕಾಲದಲ್ಲಿ ಬೈಂದೂರು ವಿಜಯನಗರ ಅರಸರ ರಾಜ್ಯಪಾಲಕ ಮತ್ತು ಹಾಡುವಳ್ಳಿಯ ರಾಜರ ಸಂಯುಕ್ತವಾದ ಆಡಳಿತಕ್ಕೆ ಸೇರಿತ್ತು. ಬಾರಕೂರು ರಾಜ್ಯಪಾಲಕ, ಗೋಪನಾಥ ಒಡೆಯರ[3] ಮತ್ತು ದಂಣಾಯಕ

* 'ಆರಾಧನಾ' ಪಾವಂಜೆ, ಹಳೆಯಂಗಡಿ-೭೪೧೪೬

1. ಎ.ಆರ್.ಎಸ್. ಐ.ಇ. ೧೯೩೦-ಸಂ.೫೩೬,೫೩೭
2. ಗಾವಣಿ ಬಳಿಯ ಗಣಪಸೆಟ್ಟಿ, ಪುರುಷಸೆಟ್ಟಿ ಅರುಣಿ ಬಳಿ ಕಾಡಿಯಂಣ ಸೆಟ್ಟಿ, ಪಡುವಕುಪ್ಪಿ ಸೆಟ್ಟಿ ಮತ್ತು ಉಪ್ಪುಂದದ ಮಾಬಲ ಸೆಟ್ಟಿಯ ಮಕ್ಕಳು.
3. ಕ್ರಿ.ಶ.೧೪೫೦ ರಲ್ಲಿ ಲಿಂಗಪ್ಪ ಒಡೆಯ ಬಾರಕೂರು ರಾಜ್ಯ ಪಾಲಕ ಎಂದು ಈ ವರೆಗೆ ತಿಳಿಯಲಾಗಿತ್ತು. ವಿವರ: ಕೆ.ವಿ.ರಮೇಶ; ತುಳುನಾಡಿನ ಇತಿಹಾಸ, ಉಡಪಿ, ೧೯೬೯, ಪು. ೯೧.

ದೇವಪ್ಪರ ಹೆಸರು ಪ್ರಥಮವಾಗಿ ತಿಳಿದು ಬರುವುದು ಈ ಶಾಸನದಲ್ಲಿ. ಇಲ್ಲಿನ ಜೈನಧರ್ಮದ ಚಿತ್ರಣವು ಈ ಶಾಸನಗಳಲ್ಲಿ ಮೂಡಿಬಂದಿದೆ. ಈ ಪಾರ್ಶ್ವನಾಥ ಬಸದಿಯು ಬೈಂದೂರು ನಕರದವೊಳಗೆ[4] ಇದ್ದಿತು. ಈ ರೀತಿ ತಿಳಿಸುವ ಶಾಸನಗಳು ಬಹಳ ಅಪರೂಪ. ಈ ಬೈಂದೂರು ಭವ್ಯ ಜನರಿಂದ ಶೋಭಿತವಾಗಿತ್ತು. ಇಲ್ಲಿನ ಜೈನಗುರುಪರಂಪರೆ, ''ಲಲಿತಕೀರ್ತಿ ಚಂದ್ರಪ್ರಭ, ಶ್ರೀ ಮೂಲಸಂಘದ ಪುಸ್ತಗಚ್ಛದ ಕೊಂಡಕುಂದಾನ್ವಯ ದೇಸಿಗಣ'' ವಾಗಿತ್ತು. ಧರ್ಮಚಂದ್ರ ದೇವರು ಇಲ್ಲಿನ ಬಸದಿಯಲ್ಲಿದ್ದು ಧರ್ಮಕಾರ್ಯ ನಡೆಸಿಕೊಂಡು ಬರುತ್ತಿದ್ದರೆಂದು ಈ ದಾಖಲೆಯ ಅಧ್ಯಯನವು ಸೂಚಿಸುತ್ತದೆ. ಈ ಬಸದಿಯ ಧಾರ್ಮಿಕ ಕಟ್ಟಳೆಗಳಲ್ಲಿ ಮಳೆಗಾಲದಲ್ಲಿ ತಂಗುವ 'ರುಶಿ'ಗಳಿಗೆ ಆಹಾರ ದಾನ, ಮತ್ತು ಇಲ್ಲಿನ ಬಸದಿಯ ಬ್ರಹ್ಮದೇವರ ದೀಪ್ತಿ ಸಮಾರಂಭ ಗಮನಾರ್ಹವಾಗಿವೆ. ಬೈಂದೂರಿನ ಗೋಪಿನಾಥ ಮತ್ತು ಉಪ್ಪುಂದ ದುರ್ಗಾದೇವಿ ದೇವಾಲಯಗಳ ಉಲ್ಲೇಖಗಳು ಈ ದೇವಾಲಯಗಳ ಚಾರಿತ್ರ್ಯಮಹತ್ವ ತಿಳಿಯಲು ಸಹಾಯಕವಾಗಿವೆ. ಈ ದೇವಾಲಯಗಳಿಗೆ ದೇವಸ್ವ ಮತ್ತು 'ಬಾಳು'[5]ಗಳಿದ್ದದ್ದು ಅಲಕ್ಷಿಸುವ ಸಂಗತಿಗಳಲ್ಲ. ಒಟ್ಟಿನಲ್ಲಿ ಪಾರ್ಶ್ವನಾಥ ಬಸದಿ ಮತ್ತು ದೇವಾಲಯಗಳೊಳಗೆ ಭೂಹಿಡುವಳಿಗಳಲ್ಲಿ ಹೊಂದಾಣಿಕೆ ಇದ್ದಿತು ಎಂದು ಈ ಶಾಸನದ ಅಧ್ಯಯನದಿಂದ ವ್ಯಕ್ತವಾಗುತ್ತದೆ. ಈ ಎರಡು ಶಾಸನಗಳು ಬೈಂದೂರು ಮತ್ತು ಉಪ್ಪುಂದಹಳ್ಳಿಮಿಶ್ರಿತ ಪಟ್ಟಣಗಳೆಂದು ತಿಳಿಸುವುದು ಗಮನಾರ್ಹ. ಬೈಂದೂರು 'ನಕರ'ದಲ್ಲಿ ಓಣಿ, ಹಿತ್ತಲಿನ ಓಣಿದಾಗಳಾಗಿದ್ದವು. ಉಪ್ಪುಂದದಲ್ಲಿ 'ಅಂಗಡಿ' ಇದ್ದು ಇದರ ತೆಂಕಲಿನಲ್ಲಿ ಹಿತ್ತಿಲು ಇದ್ದವು. ಒಟ್ಟಿನಲ್ಲಿ ಬೈಂದೂರು ಮತ್ತು ಉಪ್ಪುಂದಗಳಲ್ಲಿ ಸಣ್ಣ ಪ್ರಮಾಣದ ವ್ಯಾಪಾರಗಳು ನಡೆಯುತ್ತಿದ್ದವು. ಇಲ್ಲಿನ ಭೂಹಿಡುವಳಿ ಪದ್ಧತಿಗಳ ಕುರುತಾಗಿ ಈ ಶಾಸನಗಳು ಕೆಲವು ಕುತೂಹಲಕರ ಮಾಹಿತಿಗಳನ್ನು ತಿಳಿಸುತ್ತವೆ. ಇವುಗಳಲ್ಲಿ ಮುಖ್ಯವಾದವುಗಳು ಬಾಳು, ಉತ್ತಿಗೆ,[6] ದೇವಸ್ವ ಇವುಗಳನ್ನು ಅನುಭವಿಸಿಕೊಂಡು ಬರುವ ಜಾತಿಯವರು ಬ್ರಾಹ್ಮಣ (ಹೆಬ್ಬಾರ), ಸೆಟ್ಟರು, ಹೆಗ್ಗಡೆ, ನಾಯಕ ಮತ್ತು ಸಾಲೆಯವರು ಬ್ರಾಹ್ಮಣೇತರ ಜಾತಿಯವರಲ್ಲಿ ಮುಖ್ಯವಾದ ಬಳಿಗಳಾದ ಗಾವಣಿ, ಅರುಣಿ, ಮತ್ತು ಬಂಕಿಗಳೆಂಬ ಹೆಸರುಗಳು ಸ್ವಾರಸ್ಯವಾಗಿವೆ. ಭೂಹಿಡುವಳಿ ಕ್ರಮ ಮಕ್ಕಳು ಮತ್ತು ಸ್ತ್ರೀ ಸಂತಾನ ಪರಂಪರೆಗಳಂತೆ ನಡೆದು ಬರುತ್ತಿದ್ದವು. ಹಿತ್ತಿಲು, ಹಿತ್ತಿಲಗದ್ದೆ, ಬಯಲಗದ್ದೆ, ಕೆರೆಯಗದ್ದೆ, ಕೆರೆಯ ಬಯಲಗದ್ದೆ ಕರಣಿಕನಗದ್ದೆ. ಬೆಂಮರ ಹಾಳೆಯಗದ್ದೆ ತೆಂಗಿನತಾರೆಗಳೆಂಬ ವಿವಿಧ ತರಗತಿಯ ಕ್ರಮ ಭೂಮಿಗಳಿದ್ದವು ಎಂದು ಈ ಶಾಸನಗಳು ತಿಳಿಸುತ್ತವೆ. ಕೆರೆ, ನೀರು ಹರಿಯುವ ಓಣಿ, ಮತ್ತು ತೋಡುಗಳ ಮುಖಾಂತರ ನೀರಾವರಿ ನಡೆಸಿದ ಬೇಸಾಯವು ಇಲ್ಲಿ ನಡೆಯುತ್ತಿದ್ದವು. ತೋಡು,ಕೆರೆ. ತೆಂಗಲು ಬಂದ ಹಿತ್ತಿಲು, ದೇವಾಲಯದ ಓಣಿ ತೆಂಗಿನ ತಾರೆ ಇತ್ಯಾದಿಗಳ ಉಲ್ಲೇಖಗಳು ಇಲ್ಲಿನ ಪರಿಸರದ ಚಿತ್ರಣವನ್ನು ನೀಡುತ್ತವೆ. ಬೈಂದೂರು ಮತ್ತು ಉಪ್ಪುಂದ ಮಧ್ಯೆ ಈಗ ಇರುವ ಹೊಳೆಯ ಉಲ್ಲೇಖ ಈ ಶಾಸನಗಳಲ್ಲಿ ಇಲ್ಲದಿದ್ದು ಆಶ್ಚರ್ಯವಾಗಿದೆ. ಹಾನೆ, ಬಿತ್ತುವ ಮೂಡೆ, ಕಾಟಿಗದ್ಯಾಣ ಹೊಂನು ಮತ್ತು ಬಾರಕೂರು ಪರಿವರ್ತನೆಗೆ ಸಲ್ಲುವ ಕಾಟಿ ಹೊಂನು ಇತ್ಯಾದಿಗಳ ಉಲ್ಲೇಖಗಳು ಇಲ್ಲಿನ ಅಳತೆ ಮಾನಗಳನ್ನು ತಿಳಿಸುತ್ತವೆ. ಒಟ್ಟಿನಲ್ಲಿ ಗ್ರಾಮ್ಯಮಿಶ್ರಿತ ನಗರ ಸಂಸ್ಕೃತಿಯ ಕೆಲವು ಮಾಹಿತಿಗಳನ್ನು ಈ ಶಾಸನಗಳ ಅಧ್ಯಯನವು ನೀಡುತ್ತದೆ. O

---

4. ಆದರೆ ಈಗ ಈ ಬಸದಿಯ ಕುರುಹುಗಳು ಬೈಂದೂರು ಪೇಟೆಯ ಹೊರಗೆ ಇವೆ. ಇದರಿಂದ ಈ ಬೈಂದೂರು ಈಗೀನದಕ್ಕಿಂತ ವಿಸ್ತಾರವಾಗಿತ್ತು ಎಂದು ಅಭಿಪ್ರಾಯ ಪಡಬಹುದು.
5. ಬಾಳು ಕುಟುಂಬಗಳ ಅಥವಾ ವ್ಯಕ್ತಿಗಳ ಭೂಸ್ವತ್ತನ್ನು ತಿಳಿಸುತ್ತದೆ ದೇವಾಲಯಕ್ಕೆ ಬಿಟ್ಟ ಭೂಸ್ವತ್ತು ದೇವಸ್ವ.
6. ಉತ್ತಿ ಅಥವಾ ವೃತ್ತಿ= ಭೂಮಿಯನ್ನು ವೃತ್ತಿಯಾಗಿ ಅಥವಾ ದಾನವಾಗಿ ಪಡೆದವನು ಇದನ್ನು ಹೆಚ್ಚಾಗಿ ಬ್ರಾಹ್ಮಣರು ಹೊಂದಿದ್ದರು.

* ಈ ಶಾಸನಗಳ ಕುರುತಾಗಿ ಕೆಲವು ಮಾಹಿತಿಗಳನ್ನು ನೀಡಿದ ಶ್ರೀ ಮಾಧವ ಕಟ್ಟೆ ಮತ್ತು ಡಾ॥ ಸಂಪತ್ (ಭಾರತ ಶಾಸನ ಖಾತೆಯ ಅಧಿಕಾರಿಗಳು,) ಇವರಿಗೆ ಈ ಲೇಖಕರು ಕೃತಜ್ಞರಾಗಿದ್ದಾರೆ ಈ ಲೇಖನ ಪರಿಷ್ಕರಿಸುವಲ್ಲಿ ಸಹಕರಿಸಿದವರಲ್ಲಿ ಡಾ॥ ವಿ.ಸುಂದರ ಇವರಿಗೂ ಲೇಖಕರು ಅಭಿನಂದನೆ ಸಲ್ಲಿಸುತ್ತಾರೆ.